# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ : 720

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಆರ್. ಧರ್ಮಸೇನ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರಿಸುವ ಸಚಿವರು : ತೋಟಗಾರಿಕೆ ಮತ್ತು ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು

ಉತ್ತರಿಸಬೇಕಾದ ದಿನಾಂಕ : 17.09.2021

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಹಣ್ಣು ಮತ್ತು ತರಕಾರಿಗಳನ್ನು ಬೆಳೆಯುವ ರೈತರ ಅನುಕೂಲಕ್ಕಾಗಿ ತೋಟಗಾರಿಕೆ ಇಲಾಖೆ ಯಾವ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದೆ; | ಹಣ್ಣು ಮತ್ತು ತರಕಾರಿಗಳನ್ನು ಬೆಳೆಯುವ ರೈತರ ಅನುಕೂಲಕ್ಕಾಗಿ ಇಲಾಖೆಯಲ್ಲಿ ಅನುಷ್ಠಾನಗೊಳಿಸುತ್ತಿರುವ ಕಾರ್ಯಕ್ರಮಗಳ ವಿವರ ಈ ಕೆಳಕಂಡತಿದೆ.<br>1. ಪ್ರಧಾನ ಮಂತ್ರಿ ಕೃಷಿ ಸಿಂಚಾಯಿ ಯೋಜನೆ (ಹನಿ ನೀರಾವರಿ)ಅಡಿ ಸಹಾಯಧನ.<br>2. ರಾಷ್ಟ್ರೀಯ ತೋಟಗಾರಿಕೆ ಮಿಷನ್ ಯೋಜನೆಯಡಿ ಸಹಾಯಧನ.<br>3. ಪರಂಪರಾಗತ ಕೃಷಿ ವಿಕಾಸ ಯೋಜನೆ.<br>4. ಸಮಗ್ರ ತೋಟಗಾರಿಕಾ ಅಭಿವೃದ್ಧಿ<br>5. ತೋಟಗಾರಿಕೆ ಬೆಳೆಗಳ ಕೀಟ ಮತ್ತು ರೋಗಗಳ ಸಮಗ್ರ ನಿಯಂತ್ರಣ ಯೋಜನೆ<br>6. ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪ ಯೋಜನೆ ಕಾಯ್ದೆ 2013 ರಡಿ ಬಳಕೆಯಾಗದೆ ಇರುವ ಮೊತ್ತ.<br>7. ಪ್ರಚಾರ ಮತ್ತು ಸಾಹಿತ್ಯ. |
| ಆ) | ರೈತರಿಂದ ಹಣ್ಣು ಮತ್ತು ತರಕಾರಿಗಳನ್ನು ನೇರವಾಗಿ ಕೊಂಡು ಗ್ರಾಹಕರಿಗೆ ನ್ಯಾಯಬೆಲೆಯಲ್ಲಿ ಕೊಡುವ ಉದ್ದೇಶದಿಂದ ಹಾಪ್‌ಕಾಮ್ಸ್‌ಗಳನ್ನು ಪ್ರಾರಂಭಿಸಿದ್ದರೂ, ಇದು ಸಫಲವಾಗದಿರಲು ಕಾರಣವೇನು; | ರಾಜ್ಯದ ವಿವಿಧ ಜಿಲ್ಲೆಗಳಲ್ಲಿ ಹಾಪ್ ಕಾಮ್ಸ್ ಗಳು ಕಾರ್ಯ ನಿರ್ವಹಿಸುತ್ತಿದ್ದು, ಒಟ್ಟು 35855 ಸದಸ್ಯ ರೈತರನ್ನು ಹೊಂದಿರುತ್ತದೆ. ಹಾಪ್ ಕಾಮ್ಸ್ ಗಳು ತಮ್ಮ ಬೇಡಿಕೆಗೆ ಅನುಸಾರವಾಗಿ ಹಣ್ಣು & ತರಕಾರಿಗಳನ್ನು ರೈತರಿಂದ ನೇರವಾಗಿ ಖರೀದಿ ಮಾಡಿ ಗ್ರಾಹಕರಿಗೆ ಯೋಗ್ಯ ಬೆಲೆಯಲ್ಲಿ ತಾಜಾ ಹಣ್ಣು ಮತ್ತು ತರಕಾರಿಗಳನ್ನು ಸಂಸ್ಥೆಯ ಸುಮಾರು 450 ಮಾರಾಟ ಮಳಿಗೆಗಳ ಮೂಲಕ ಪೂರೈಸಿ ವಾರ್ಷಿಕ ಅಂದಾಜು ರೂ.150.00 ಕೋಟಿಗಳಷ್ಟು ವ್ಯಾಪಾರ ವಹಿವಾಟನ್ನು ಯಶಸ್ವಿಯಾಗಿ ನಡೆಸುತ್ತಿದೆ. |

| | | |
|---|---|---|
| ಇ) | ತರಕಾರಿ ಮತ್ತು ಹಣ್ಣುಗಳನ್ನು ಬೆಳೆದ ರೈತರು ತಮ್ಮ ಬೆಳೆಗೆ ಸರಿಯಾದ ಬೆಲೆ ಸಿಗುತ್ತಿಲ್ಲವೆಂದು ಹಣ್ಣು ಮತ್ತು ತರಕಾರಿಗಳನ್ನು ಬೀದಿಗೆ ಎಸೆದು ಪ್ರತಿಭಟನೆ ಮಾಡಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಕೆಲವೊಂದು ಸಂದರ್ಭಗಳಲ್ಲಿ ರಾಜ್ಯ ಮತ್ತು ಹೊರ ರಾಜ್ಯಗಳ ತೋಟಗಾರಿಕೆ ಉತ್ಪನ್ನಗಳ ಬೇಡಿಕೆ ಮತ್ತು ಸರಬರಾಜು ಪೂರೈಕೆಯಲ್ಲಿ ವ್ಯತ್ಯಾಸವಾಗಿ ಮಾರುಕಟ್ಟೆಯಲ್ಲಿ ಧಾರಣೆಯು ಕುಸಿತಗೊಂಡಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ. |
| ಈ) | ಹಾಪ್‌ಕಾಮ್ಸ್‌ಗಳಲ್ಲಿ ಹಣ್ಣು ಮತ್ತು ತರಕಾರಿಗಳ ಬೆಲೆ ನಮೂದಿಸಿ ಮಳಿಗೆಗಳ ಮುಂದೆ ಬೋರ್ಡ್ ಹಾಕದೆ, ಉತ್ತಮ ದರ್ಜೆಯ ಹಣ್ಣು ಮತ್ತು ತರಕಾರಿಗಳನ್ನು ಒದಗಿಸದೆ. ಕಳಪೆ ಹಣ್ಣು ಮತ್ತು ತರಕಾರಿ ಮಾರುತ್ತಿರುವ ಎಷ್ಟು ಮಳಿಗೆಗಳ ಮೇಲೆ ಕ್ರಮ ಕೈಗೊಳ್ಳಲಾಗಿದೆ? (ಬೆಂಗಳೂರು ನಗರದ ಕಳೆದ 2 ವರ್ಷಗಳ ಮಾಹಿತಿ ನೀಡುವುದು) | ಹಾಪ್ ಕಾಮ್ಸ್ ಗಳಲ್ಲಿ ಪ್ರತಿ ದಿನದ ಹಣ್ಣು ಮತ್ತು ತರಕಾರಿಗಳ ಬೆಲೆಯನ್ನು ಮಳಿಗೆಗಳ ಮುಂದೆ ಬೋರ್ಡ್ ನಲ್ಲಿ ನಮೂದಿಸಲಾಗುತ್ತಿದೆ. 2017-18 ನೇ ಸಾಲಿನಿಂದ ಬೆಂಗಳೂರು ಹಾಪ್ ಕಾಮ್ಸ್ ಸಂಸ್ಥೆಯಲ್ಲಿ ಎಲ್ಲಾ ಮಾರಾಟ ಮಳಿಗೆಗಳಲ್ಲಿ ಗ್ರಾಹಕರಿಗೆ ಆನ್ ಲೈನ್ ಬಿಲ್ ನೀಡುವ ವ್ಯವಸ್ಥೆಯನ್ನು ಜಾರಿಗೊಳಿಸಲಾಗಿದೆ. ಪ್ರತಿ ದಿನ ಬೆಳಿಗ್ಗೆ 7.30 ಕ್ಕೆ ಹಣ್ಣು ತರಕಾರಿಗಳ ಮಾರಾಟ ದರಗಳನ್ನು ಎಲ್ಲಾ ಮಳಿಗೆಗಳ ಆನ್ ಲೈನ್ ಸ್ಕೇಲ್ ಗಳಿಗೆ ರವಾನಿಸಲಾಗುತ್ತಿದೆ. ಗ್ರಾಹಕರು ಖರೀದಿಸಿದ ಹಣ್ಣು ತರಕಾರಿಗಳಿಗೆ ಐಟಂವಾರು ಆನ್ ಲೈನ್ ಬಿಲ್ ನೀಡಲಾಗುತ್ತಿದೆ.<br><br>ಕಳೆದ 2 ವರ್ಷಗಳ ಅವಧಿಯಲ್ಲಿ ಕಳಪೆ ಹಣ್ಣು ತರಕಾರಿಗಳನ್ನು ಮಾರಾಟ ಮಾಡುತ್ತಿದ್ದ 9 ಮಳಿಗೆಗಳ ಮಾರಾಟಗಾರರಿಗೆ ಕಾರಣ ಕೇಳುವ ನೋಟೀಸ್ ನೀಡಿ, ಸಮಜಾಯಿಷಿ ಪಡೆದು, ಎಚ್ಚರಿಕೆ ನೀಡಲಾಗಿದೆ. ಹಾಗೂ ಒಬ್ಬ ಮಾರಾಟಗಾರರಿಗೆ ರೂ.5000/- ಗಳ ದಂಡ ವಿಧಿಸಲಾಗಿದೆ. ಕೈಗೊಂಡ ಕ್ರಮಗಳ ವಿವರದ ಪಟ್ಟಿಯನ್ನು ಅನುಬಂಧದಲ್ಲಿ ಲಗತ್ತಿಸಿದೆ. |

**No.HORTI 378 HGM 2021**

(ಮುನಿರತ್ನ)

ತೋಟಗಾರಿಕೆ ಮತ್ತು ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವರು.

LCQ-720

ಅನುಬಂಧ

ಬೆಂಗಳೂರು ನಗರದಲ್ಲಿ ಕಳೆದ 2 ವರ್ಷಗಳಲ್ಲಿ ಕಳಪೆ ಹಣ್ಣು ಮತ್ತು ತರಕಾರಿ ಮಾರುತ್ತಿರುವ ಮಳಿಗೆಗಳ ಮೇಲೆ ಕೈಗೊಂಡ ಕ್ರಮಗಳ ವಿವರ

| ಕ್ರ. ಸಂ | ಮಳಿಗೆ ಸಂಖ್ಯೆ ಮತ್ತು ವಿಳಾಸ ಹಾಗೂ ಮಾರಾಟಗಾರರ ಹೆಸರು | ಕೈಗೊಂಡ ಕ್ರಮ | |
|---|---|---|---|
| | | ಕಾರಣ ಕೇಳುವ ನೋಟೀಸ್ ನೀಡಿದ ದಿನಾಂಕ | ಯಾವ ಉದ್ದೇಶಕ್ಕಾಗಿ ಕಾರಣ ಕೇಳುವ ನೋಟೀಸ್ ನೀಡಲಾಗಿದೆ |
| 1 | ಮಳಿಗೆ ಸಂಖ್ಯೆ : 142<br>ವಿಳಾಸ : ಬ್ರಿಗೇಡ್ ರಸ್ತೆ,<br>ಮಾರಾಟಗಾರರ ಹೆಸರು : ಹೆಚ್.ಬಿ.ಕೃಷ್ಣ | 05.12.2020 | ಮಳಿಗೆಯಲ್ಲಿ ಹಣ್ಣು ತರಕಾರಿಗಳ ದರ ವ್ಯತ್ಯಾಸ ಮಾಡಿ ಹೆಚ್ಚಿನ ಬೆಲೆಗೆ ಮಾರಾಟ ಮಾಡಿರುವ ಬಗ್ಗೆ ಮಾರಾಟಗಾರರಿಗೆ ಕೇಳುವ ನೋಟೀಸ್ ನೀಡಿ ಸಮಜಾಯಿಷಿ ಪಡೆದು ರೂ.5000/- ಗಳ ದಂಡ ವಿಧಿಸಲಾಗಿದೆ. |
| 2 | ಮಳಿಗೆ ಸಂಖ್ಯೆ : ಸಂಚಾರಿ ಮಾರಾಟ ಮಳಿಗೆ<br>ಮಾರಾಟಗಾರರ ಹೆಸರು : ವೆಂಕಟೇಶ್ | 26.05.2021 | ಮಳಿಗೆಯಲ್ಲಿ ಹಣ್ಣು ತರಕಾರಿಗಳ ದರ ವ್ಯತ್ಯಾಸ ಮಾಡಿ ಹೆಚ್ಚಿನ ಬೆಲೆಗೆ ಮಾರಾಟ ಮಾಡಿರುವ ಬಗ್ಗೆ ಮಾರಾಟಗಾರರಿಗೆ ಕೇಳುವ ನೋಟೀಸ್ ನೀಡಿ ಸಮಜಾಯಿಷಿ ಪಡೆದು ಎಚ್ಚರಿಕೆ ನೋಟೀಸ್ ನೀಡಲಾಗಿದೆ. |
| 3 | ಮಳಿಗೆ ಸಂಖ್ಯೆ : 143<br>ವಿಳಾಸ : ಸಂಜಯನಗರ,<br>ಮಾರಾಟಗಾರರ ಹೆಸರು : ಎಂ.ಎಸ್.ರುದ್ರಸ್ವಾಮಿ | 10.06.2021 | ಮಳಿಗೆಯಲ್ಲಿ ಹಣ್ಣು ತರಕಾರಿಗಳ ದರ ವ್ಯತ್ಯಾಸ ಮಾಡಿ ಹೆಚ್ಚಿನ ಬೆಲೆಗೆ ಮಾರಾಟ ಮಾಡಿರುವ ಬಗ್ಗೆ ಮಾರಾಟಗಾರರಿಗೆ ಕೇಳುವ ನೋಟೀಸ್ ನೀಡಿ ಸಮಜಾಯಿಷಿ ಪಡೆದು ಎಚ್ಚರಿಕೆ ನೋಟೀಸ್ ನೀಡಲಾಗಿದೆ. |
| 4 | ಮಳಿಗೆ ಸಂಖ್ಯೆ : 156<br>ವಿಳಾಸ : ಎಂ.ಎಸ್.ರಾಮಯ್ಯ ಆಸ್ಪತ್ರೆ<br>ಮಾರಾಟಗಾರರ ಹೆಸರು : ಎ.ಎಸ್.ಸಿದ್ದರಾಮಯ್ಯ | 10.06.2021 | ಮಳಿಗೆಯಲ್ಲಿ ಹಣ್ಣು ತರಕಾರಿಗಳ ದರ ವ್ಯತ್ಯಾಸ ಮಾಡಿ ಹೆಚ್ಚಿನ ಬೆಲೆಗೆ ಮಾರಾಟ ಮಾಡಿರುವ ಬಗ್ಗೆ ಮಾರಾಟಗಾರರಿಗೆ ಕೇಳುವ ನೋಟೀಸ್ ನೀಡಿ ಸಮಜಾಯಿಷಿ ಪಡೆದು ಎಚ್ಚರಿಕೆ ನೋಟೀಸ್ ನೀಡಲಾಗಿದೆ. |

| | | | |
|---|---|---|---|
| 5 | ಮಳಿಗೆ ಸಂಖ್ಯೆ : 223<br>ವಿಳಾಸ : ಡಾಲರ್ಸ್ ಕಾಲೋನಿ<br>ಮಾರಾಟಗಾರರ ಹೆಸರು : ಟಿ.ವಿ.ಮುದ್ದುಕೃಷ್ಣ | 10.06.2021 | ಮಳಿಗೆಯಲ್ಲಿ ಹಣ್ಣು ತರಕಾರಿಗಳ ದರ ವ್ಯತ್ಯಾಸ ಮಾಡಿ ಹೆಚ್ಚಿನ ಬೆಲೆಗೆ ಮಾರಾಟ ಮಾಡಿರುವ ಬಗ್ಗೆ ಮಾರಾಟಗಾರರಿಗೆ ಕೇಳುವ ನೋಟೀಸ್ ನೀಡಿ ಸಮಜಾಯಿಷಿ ಪಡೆದು ಎಚ್ಚರಿಕೆ ನೋಟೀಸ್ ನೀಡಲಾಗಿದೆ. |
| 6 | ಮಳಿಗೆ ಸಂಖ್ಯೆ : 08<br>ವಿಳಾಸ : ಸದಾಶಿವನಗರ,<br>ಮಾರಾಟಗಾರರ ಹೆಸರು : ಶಂಕರ | 28.06.2021 | ಗ್ರಾಹಕರಿಗೆ ಆನ್ ಲೈನ್ ಬಿಲ್ ನೀಡದೇ ಇರುವ ಬಗ್ಗೆ ಕಾರಣ ಕೇಳುವ ನೋಟೀಸ್ ನೀಡಿ ಸಮಜಾಯಿಷಿ ಪಡೆದು ಎಚ್ಚರಿಕೆ ನೋಟೀಸ್ ನೀಡಲಾಗಿದೆ. |
| 7 | ಮಳಿಗೆ ಸಂಖ್ಯೆ : 241<br>ವಿಳಾಸ : ದತ್ತಾತ್ರೇಯ ದೇವಸ್ಥಾನ, ಮಲ್ಲೇಶ್ವರ,<br>ಮಾರಾಟಗಾರರ ಹೆಸರು : ಪಿ.ಚಂದ್ರಶೇಖರ | 02.07.2021 | ಮಳಿಗೆಯಲ್ಲಿ ಗುಣಮಟ್ಟದ ಪದಾರ್ಥಗಳನ್ನು ಇಡದೇ ಇರುವ ಬಗ್ಗೆ ಕಾರಣ ಕೇಳುವ ನೋಟೀಸ್ ನೀಡಿ ಸಮಜಾಯಿಷಿ ಪಡೆದು ಎಚ್ಚರಿಕೆ ನೋಟೀಸ್ ನೀಡಲಾಗಿದೆ. |
| 8 | ಮಳಿಗೆ ಸಂಖ್ಯೆ : 147<br>ವಿಳಾಸ : ಬನಶಂಕರಿ ಬಿ.ಡಿ.ಎ ಕಾಂಪ್ಲೆಕ್ಸ್<br>ಮಾರಾಟಗಾರರ ಹೆಸರು : ಹೆಚ್.ಬಿ.ಕೃಷ್ಣ | 28.07.2021 | ಮಳಿಗೆಯಲ್ಲಿ ಹಣ್ಣು ತರಕಾರಿಗಳ ದರ ವ್ಯತ್ಯಾಸ ಮಾಡಿ ಹೆಚ್ಚಿನ ಬೆಲೆಗೆ ಮಾರಾಟ ಮಾಡಿರುವ ಬಗ್ಗೆ ಮಾರಾಟಗಾರರಿಗೆ ಕೇಳುವ ನೋಟೀಸ್ ನೀಡಿ ಸಮಜಾಯಿಷಿ ಪಡೆದು ಎಚ್ಚರಿಕೆ ನೋಟೀಸ್ ನೀಡಲಾಗಿದೆ. |
| 9 | ಮಳಿಗೆ ಸಂಖ್ಯೆ : 249<br>ವಿಳಾಸ : ದೊಮ್ಮಲೂರು<br>ಮಾರಾಟಗಾರರ ಹೆಸರು : ಕೆ.ತಿಮ್ಮೇಗೌಡ | 04.08.2021 | ಗ್ರಾಹಕರಿಗೆ ಆನ್ ಲೈನ್ ಬಿಲ್ ನೀಡದೇ ಇರುವ ಬಗ್ಗೆ ಕಾರಣ ಕೇಳುವ ನೋಟೀಸ್ ನೀಡಿ ಸಮಜಾಯಿಷಿ ಪಡೆದು ಎಚ್ಚರಿಕೆ ನೋಟೀಸ್ ನೀಡಲಾಗಿದೆ. |

~~ತೋಟಗಾರಿಕೆ ಜಂಟಿ~~ ನಿರ್ದೇಶಕರು

ಯೋಜನೆ